ಒಂದಾಣೆ ಮಾಲೆ 224

# ನಾಡ ನುಡಿಗಳು

[ಭಾಗ ೨]



ಸಂಗ್ರಾಹಕ:
ಶ್ರೀ ಎಂ. ಸಂಜೀವ ಶೆಟ್ಟಿ, ಮೂಡಹಡು.



1959

ಬೆಲೆ: ೧ ಆಣೆ.

ಒಂದಾಣೆ ಮಾಲೆ, ಮಂಗಳೂರು.

## ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1959ನೇ ಫೆಬ್ರವರಿ ತಿಂಗಳ ನಾಲ್ಕನೆಯ ವಾರದ ವರೆಗೆ 224 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

224 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4426 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ-ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS. CAR STREET, MANGALORE-1.

# ನಾಡ ನುಡಿಗಳು

## (ಭಾಗ ೨)

---

೨೨೬ ನೆಲದ ಹೊಂಡ, ಮಣ್ಣಿ ಕೋರ್ಕೆ (ಪಾತ್ರೆ).

೨೨೭ ಹಾರುವ ಎತ್ತಿಗೆ ಹಣೆಯ ಮೇಲೆ ಹೊಡೆದ ಹಾಗೆ.

೨೨೮ ಮಾಡದೆ ಇದ್ದುದು ಮಾಡಿದರೆ, ಆಗದೆ ಇದ್ದುದು ಆಗುತ್ತದೆ.

೨೨೯ ಮರ್ಯಾದೆ ಬಿಟ್ಟವರು ಊರಿಗೆ ದೊಡ್ಡವರು.

೨೩೦ ಬರಗಾಲ ಬಂದ ವರ್ಷ ಮಗ ಊಟಮಾಡಲು ಕಲಿತ.

೨೩೧ ಸುಣ್ಣವಿಲ್ಲದ ವೀಳ್ಯ, ಹೆಣ್ಣಿಲ್ಲದ ಬಾಳ್ವೆ ಎರಡೂ ಒಂದೇ.

೨೩೨ ಕಪ್ಪೆ ಹಿಡಿದು ಸಿಬ್ಬಿಗೆ (ಬೀಳಿನ ಬುಟ್ಟಿ) ಹಾಕಿದ ಹಾಗೆ.

೨೩೩ ಹುಟ್ಟುಗುಣ ಬೆಟ್ಟ ಹತ್ತಿದರೂ ಬಿಡದು.

೨೩೪ ಕುಪ್ಪನ (ಒಂದು ಪಕ್ಷಿ) ನಂಬಿ ಕೊಳಕೆ ನಟ್ಟರೆ, ಕುಪ್ಪ ಹಾರಿ ಹೋಯಿತು, ಕೊಳಕೆ ಉರಿದು ಹೋಯಿತು.

೨೩೫ ಅಗ್ಗ ಸೆಟ್ಟಿ ಮುಗ್ಗ ಜೋಳ.

೨೩೬ ಕಳ್ಳನ ಹೆಜ್ಜೆ ಕಳ್ಳನೇ ಬಲ್ಲ.

೨೩೭ ಪ್ರಾಯ ಬಂದಾಗ ನಾಯಿ ಸಹ ಚಂದ.

೨೩೮ ಬರೀ ಕೈಲಿ ಮೊಳ ಹಾಕಿದ ಹಾಗೆ.

೨೩೯ ಆನೆಗಳ ಹೋರಾಟದಲ್ಲಿ ಗಿಡಗಡ್ಡೆಗಳು ಪುಡಿ.

೨೪೦ ಹೆಣ್ಣು ಬಾಳಿಸುವವನ ಕಣ್ಣು ನೋಡಿದರೆ ತಿಳಿಯುತ್ತದೆ.

೨೪೧ ನಾಯಿಯ ಬಾಲ ಓಟೆಯೊಳಗೆ ಹಾಕಿದರೂ ಡೊಂಕೇ.

೨೪೨ ಹಣ ಕಂಡರೆ ಹೆಣ ಬಾಯಿಬಿಡುತ್ತದೆ.

೨೪೩ ಹಾಸಿಗೆ ಇದ್ದಷ್ಟು ಕಾಲು ಚಾಚು.

೨೪೪ ಉಪಾಯವಿದ್ದರೆ ಸಿಪಾಯಿ.

೨೪೫ ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು.

೨೪೬ ಹೆತ್ತವರಿಗೆ ಹೆಗ್ಗಣ ಮುದ್ದು.

೨೪೭ ಹಣೆ ನೋಡಿ ಮಣೆ.

೨೪೮ ನೆಸಿ (ಸಲಿಗೆ) ಕೊಟ್ಟ ನಾಯಿ, ನೆಸಲು (ನೊಸಲು) ನೆಕ್ಕುತ್ತದೆ.
೨೪೯ ಎತ್ತು ದೊಡ್ಡದು, ಕೋಡು ದೊಡ್ಡದು.
೨೫೦ ಬಂದೆತ್ತ ನಂಬಿ, ಇದ್ದೆತ್ತು ಹೋಯಿತು.
೨೫೧ ಸೆಟ್ಟಿ ಇಳಿದಲ್ಲೇ ಪಟ್ಟಣ.
೨೫೨ ಬೆಳೆಯು ಸಿರಿ ಮೊಳಕೆಯಲ್ಲೇ ಕಾಣುತ್ತದೆ.
೨೫೩ ಊಟಮಾಡಲಿಕ್ಕಿಲ್ಲದವ ಸಣ್ಣಕ್ಕಿ ಉಂಡ, ಉಡಲಿಕ್ಕಿಲ್ಲದವ ಪಟ್ಟೆ ಉಟ್ಟ.
೨೫೪ ಕಾಸು ಕೊಟ್ಟು ಹೊಳೆ ಮೀಸುವುದು.
೨೫೫ ಪಾಪಿ ಹೋದಲ್ಲಿ ಪಾತಾಳ.
೨೫೬ ಕರು ಹಾರಿದರೆ ಗೂಟದ ಕೆಳಗೆ.
೨೫೭ ಹಣವಿದ್ದವನ ಕೈ ಹಿಡಿದರೆ, ಋಣವಿದ್ದಷ್ಟು ಸಿಕ್ಕಬಹುದು.
೨೫೮ ಬೇಡಲಿಕ್ಕೆ ಬಂದವನು ಬೆಳ್ತಿಗೆ ಕೇಳುತ್ತಾನೆ.
೨೫೯ ತೋಟ ಶೃಂಗಾರ ಒಳಗೆ ಗೋಳಿಸೊಪ್ಪು.
೨೬೦ ಎಂದೂ ಓದದೆ ಇದ್ದ ಮಗ, ಅಮಾವಾಸೆ ಬೂದಿಯಾಗಿ ಓದಿದ.
೨೬೧ ಕಾಣದೆ ಇದ್ದ ಊರಿಗೆ ಹೋಗದೆ ಇದ್ದ ಕಾಗದ.
೨೬೨ ‘ಗ’ ಅಂದ ಕೂಡಲೇ ‘ಗಬ್ಬ’ ಅನ್ನಬಾರದು.
೨೬೩ ನೆರೆಮನೆ ಹಾಳಾದರೆ, ಕರುವನ್ನು ಕಟ್ಟಲು ಸ್ಥಳವಾದೀತು.
೨೬೪ ಅಂಗೈ ನೋಡಲು ಕನ್ನಡಿ ಬೇಕೆ?
೨೬೫ ಭತ್ತ ಬೆಳೆಯುವಲ್ಲಿ, ಮುತ್ತಿನ ಮರವೂ ಇರಬಾರದು.
೨೬೬ ಮಾಡಿದವನುಣ್ಣುತ್ತಾನೆ, ಮನೆಯಂಥ ಕಡಬು.
೨೬೭ ಆನೆ ಹೊರುವವನಿಗೆ, ಹೋರಿ ತೋರದ ಇರಿಕೆ.
೨೬೮ ಹಂದಿ ಹಾದವನಿಗೆ ಕಗ್ಗಲ್ಲೂ ಭಯ.
೨೬೯ ತನ್ನ ಉರುಳು ತನ್ನ ಕೊರಳಿಗೆ.
೨೭೦ ಕೈ ಕೆಸರಾದರೆ ಬಾಯಿ ಮೊಸರು.
೨೭೧ ಕೋಣನ ಮುಂದೆ ವೀಣೆ ಬಾರಿಸಿದ ಹಾಗೆ.
೨೭೨ ರಗಳೆ ದೇವರಿಗೆ ಮರದ ಜಾಗಂಟೆ.
೨೭೩ ಸಾಲ ಹಿಡಿದರೆ ಶೂಲ.
೨೭೪ ಊರಿಗೆ ಅರಸನಾದರೂ ತಾಯಿಗೆ ಮಗ.

೨೭೫ ರೊಕ್ಕಪ್ಪ ಇದ್ದರೆ ಚಿಕ್ಕಪ್ಪ ಇದ್ದಾನೆ.
೨೭೬ ಪೇಟೆಯಲ್ಲಿ ಮೂಗು ಕೊಯ್ಸಿಕೊಂಡವನಿಗೆ, ಹಳ್ಳಿಯಲ್ಲಿ ನಾಚಿಕೆ!
೨೭೭ ಬಿಸಿಯಾಗದೆ ಬೆಣ್ಣೆ ಕರಗದು.
೨೭೮ ನೀರಿನಲ್ಲಿ ತೇಲುವವನಿಗೆ ಹುಲ್ಲುಕಡ್ಡಿಯೇ ಆಧಾರ.
೨೭೯ ಕೈಯಲ್ಲಿ ಆಗದಿದ್ದವರಿಗೆ ಕಡೆಯಂಗಡಿ ವ್ಯಾಪಾರ.
೨೮೦ ಏನೆಂದರೂ ಮಗ ಹರಿಯೆನುವುದ ಬಿಡ.
೨೮೧ ಇದ್ದಲ್ಲಿಯೇ ಇದ್ದರೆ ಬಿದ್ದಿನವರಿಗೂ (ನೆಂಟರು) ಸಸಾರ.
೨೮೨ ಬಡಿಸುವವಳು ನಮ್ಮವಳಾದರೆ, ನೆಲ್ಲಿಯ ಎಲೆಯಲ್ಲಿ ಊಟ ಮಾಡಬಹುದು.
೨೮೩ ಅಳಿಲ ಸೇವೆ ಮಳಲು ಭಕ್ತಿ.
೨೮೪ ಕಂಡ ಹಾಗೆ ಹೇಳಿದರೆ, ಕೆಂಡದಂಥ ಕೋಪ.
೨೮೫ ಹೆಡ್ಡರು ಸಿಕ್ಕಿದರೆ, ಹೆಡ್ಗೆ (ಬುಟ್ಟಿ)ಯಲ್ಲಿ ನೀರು ಹೊರಿಸುವರು.
೨೮೬ ಹಣವಿದ್ದವನು ಊರಿಗೆಲ್ಲ ನೆಂಟ.
೨೮೭ ಕೊಂದ ಪಾಪ ತಿಂದು ಪರಿಹಾರ.
೨೮೮ ಬಂದರೆ ಮಳೆ, ಕಾದರೆ ಬಿಸಿಲು.
೨೮೯ ಕೊಲುವವನಿಗಿಂತ, ಕಾಯುವವನೇ ದೊಡ್ಡವನು.
೨೯೦ ತಾನು ಒಳ್ಳೆಯವನಾದರೆ, ಊರೇ ಒಳ್ಳೇದು.
೨೯೧ ಪರನಿಂದೆ ಕುಲನಾಶ.
೨೯೨ ನಡೆಯುವವನು ಎಡವುತ್ತಾನೆ.
೨೯೩ ನಾಯಿ ಸಾಯುವ ಮೊದಲು ಸನ್ಯಾಸಿಯ ಕಾಲು ಕೊಳೆಯುತ್ತದೆ.
೨೯೪ ಹೊಸ ವೈದ್ಯನಿಗಿಂತ ಹಳೆ ರೋಗಿಯೇ ಮೇಲು.
೨೯೫ ಕೆಟ್ಟ ಹೆಣ್ಣು ಕುಲದ ಹೊರಗೆ.
೨೯೬ ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ.
೨೯೭ ಉದ್ದವಾದವರ ಗಡ್ಡ ಹಿಡಿದರೆ, ಮತ್ತಷ್ಟು ಉದ್ದ.
೨೯೮ ಆಡಿನ ಕೊಟ್ಟಿಗೆಯಲ್ಲಿದ್ದು ದೇವಲೋಕದ ಸುದ್ದಿ!
೨೯೯ ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು ಸಿಕ್ಕಿತು.
೩೦೦ ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ.
೩೦೧ ಕಾಲಕ್ಕೆ ಸರಿಯಾಗಿ ಕೋಲ ಕಟ್ಟುವುದು; ಮಳೆ ಬಂದತ್ತ ಕೊಡೆ ಹಿಡಿಯುವುದು.

೩೦೨ ಏರಿದವ ಇಳಿದಾನು; ತಾಳಿದವ ಬಾಳಿಯಾನು.
೩೦೩ ಆಳುವವನಿಗೆ ಅರ್ಧ ರಾಜ್ಯ; ಬೇಡುವವನಿಗೆ ಇಡೀ ರಾಜ್ಯ.
೩೦೪ ಬರುತ್ತಾ ಬರುತ್ತಾ ರಾಯರ ಕುದುರೆ ಕತ್ತೆಯಾಯಿತು.
೩೦೫ ಖರ್ಜೂರ ಆಗುವಾಗ ಕಾಗೆಯ ಬಾಯಿಯಲ್ಲಿ ಹುಣ್ಣು.
೩೦೬ ಬೆಕ್ಕಿಗೆ ಆಟ, ಇಲಿಗೆ ಪ್ರಾಣ ಸಂಕಟ.
೩೦೭ ಇಬ್ಬರ ನ್ಯಾಯ, ಮೂರನೆಯವನಿಗೆ ಆದಾಯ.
೩೦೮ ಮಿಣ್ಣಗಿದ್ದವರ ಬಣ್ಣ ಮೇಲು.
೩೦೯ ಬಂಗಾರದ ಕತ್ತಿಯಾದರೂ, ಮೂಗು ಕತ್ತರಿಸಲಾಗದು.
೩೧೦ ತನ್ನ ರೊಟ್ಟಿ ತನ್ನ ಕಪಾಲಕ್ಕೆ.
೩೧೧ ಅಳಿದ ಊರಿಗೆ ಉಳಿದವನೇ ಗೌಡ.
೩೧೨ ಗುಡ್ಡೆಗೆ ಗುಡ್ಡ ಅಡ್ಡ ಉಂಟು.
೩೧೩ ಕಾಡಿನಲ್ಲಿರುವ ಕಳ್ಳರನ್ನಾದರೂ ನಂಬಬಹುದು, ಊರಿನಲ್ಲಿರುವ ಕಳ್ಳರನ್ನು ನಂಬಬಾರದು.
೩೧೪ ಉಪ್ಪರಿಗೆಯ ಮನೆಯವನಾದರೂ, ಉಪ್ಪಿಲ್ಲದೆ ಆಗದು.
೩೧೫ ಬಾಯಲ್ಲಿ ಬಣ್ಣ, ಬಗಲಲ್ಲಿ ದೊಣ್ಣೆ.
೩೧೬ ಮೆಚ್ಚಿದವನಿಗೆ ಮಸಣ ಸುಖ.
೩೧೭ ಹತ್ತು ಜನರ ಸಾವು, ಮದುವೆಗೆ ಸಮಾನ.
೩೧೮ ಅಕ್ಕನ ಚಿನ್ನವಾದರೂ, ಅಕ್ಕಸಾಲಿ ಬಿಡ.
೩೧೯ ತೊಡುವುಂಟು, ಸೆಡ ಬಿಡ.
೩೨೦ ಅತಿ ಆಸೆ ಗತಿ ಗೇಡು.
೩೨೧ ಹಬ್ಬ ತಪ್ಪಿದರೆ, ಹೋಳಿಗೆ ತಪ್ಪದು.
೩೨೨ ಮೀಸೆ ಬರುವಾಗ ದೇಶ ಕಾಣದು.
೩೨೩ ಹುಲಿ ಮೈ ಬಣ್ಣಕ್ಕೆ ನರಿ ಮೈ ಸುಟ್ಟುಕೊಂಡಿತು.
೩೨೪ ಉಗುಳಿ ಉಗುಳಿ ರೋಗ, ಬೊಗಳಿ ಬೊಗಳಿ ರಾಗ.
೩೨೫ ಜಾತಿ ಜಾತಿಗೆ ಹಗೆ; ನಾಯಿ ನಾಯಿಗೆ ಹಗೆ.
೩೨೬ ಹಳ್ಳಿಯ ಊರಿಗೆ ಕೊಳ್ಳಿಯ ಬೆಳಕು.
೩೨೭ ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ.
೩೨೮ ದೇವರು ಕೊಟ್ಟರೂ ಪೂಜಾರಿ ಬಿಡ.

೩೨೯ ಹನಿ ಕೂಡಿ ಹಳ್ಳ; ಮನೆ ಕೂಡಿ ಹಳ್ಳಿ.
೩೩೦ ಕಂಡು ಸಾಕಿದ ಮಗನ ಕಣ್ಣು ಕುರುಡು.
೩೩೧ ಅಂದಿಗೆ ಅದೇ ಸುಖ; ಇಂದಿಗೆ ಇದೇ ಸುಖ.
೩೩೨ ಸಂಕ ಮುರಿದಲ್ಲೇ ಸ್ನಾನ; ಎಣ್ಣೆ ಕಂಡಲ್ಲೇ ಶನಿವಾರ.
೩೩೩ ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು.
೩೩೪ ಉಂಡ ಹೊಟ್ಟೆ ನಂಬಿ, ಒಲೆಗುಂಡು ಅಳಿದ.
೩೩೫ ಎತ್ತಿನ ಜ್ವರಕ್ಕೆ ಕೋಣನಿಗೆ ಬರೆ.
೩೩೬ ಬ್ರಾಹ್ಮಣ ಮಾಡುವುದು ಪಿಂಡಕ್ಕೆ, ಸೆಟ್ಟಿ ಮಾಡುವುದು ದಂಡಕ್ಕೆ, ಶೂದ್ರ ಮಾಡುವುದು ಹೆಂಡಕ್ಕೆ.
೩೩೭ ಉಂಡಿಯಾ ಕೇಳಿದರೆ, ಮುಂಡಾಸು ಮೂವತ್ತು ಮೊಳ.
೩೩೮ ರೋಗಿ ಬಯಸಿದ್ದೂ ಹಾಲು, ವೈದ್ಯ ಕೊಟ್ಟದ್ದೂ ಹಾಲು.
೩೩೯ ನಿದ್ರೆ ಬಂದವನನ್ನು ಹಾಸಿಗೆಗೆ ದೂಡಿದ ಹಾಗೆ.
೩೪೦ ಓದುವುದು ವೇದ, ಹಾಕುವುದು ಗಾಳ.
೩೪೧ ಇಡೀ ರಾತ್ರಿ ಹೊಟ್ಟೆ ನೋವು, ಹೆತ್ತದ್ದು ಒಂದೇ ಮಗು.
೩೪೨ ಕುಟ್ಟಿ ಕುಂದಾಪುರಕ್ಕೆ ಹೋದ ಹಾಗೆ.
೩೪೩ ನಾಯಿಹುಣ್ಣಿಗೆ ಬೂದಿ ಮದ್ದು.
೩೪೪ ಗಂಡ ಸತ್ತ ದುಃಖ ಬೇರೆ, ಬಡ್ಡು ಕೂಪಿನ (ಬಾಳಿನ) ಉರಿ ಬೇರೆ.
೩೪೫ ಹಾವು ಸಾಯಬಾರದು, ಕೋಲು ಮುರಿಯಬಾರದು.
೩೪೬ ಅಹಂಕಾರಕ್ಕೆ ಉದಾಸೀನವೇ ಮದ್ದು.
೩೪೭ ಶಕ್ತಿಗಿಂತ ಯುಕ್ತಿಯೇ ಮೇಲು.
೩೪೮ ಅಂತೂ ಇಂತೂ ಕುಂತೀ ಮಕ್ಕಳಿಗೆ ವನವಾಸ.
೩೪೯ ಆದರೆ ಹೋದರೆ ಹತ್ತಿ ಬೆಳೆದರೆ, ಅಜ್ಜಿಗೊಂದು ಪಟ್ಟೆ ಸೀರೆ.
೩೫೦ ಸಾಯುವ ಕಾಲಕ್ಕೆ ಮಾಳಪ್ಪ ಮೀನು ತಿಂದು ಸತ್ತ.
೩೫೧ ಹಾಡಿದ್ದೇ ಹಾಡಿದ ಕಿಸುಬಾಯಿ ದಾಸ.
೩೫೨ ಇಂದು ನಾಳೆನ್ನದೆ ಕಲಿತವನೇ ಕಡು ಜಾಣ.
೩೫೩ ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ.
೩೫೪ ಉಗಿದರೆ ತುಪ್ಪ ಕೆಡುತ್ತದೆ, ನುಂಗಿದರೆ ಗಂಟಲು ಸುಡುತ್ತದೆ.
೩೫೫ ಹೊಟ್ಟೆ ತುಂಬದ ಮೇಲೆ ಅಮೃತವಾದರೂ ವಿಷ.

೩೫೬ ಬಗ್ಗಿದವನಿಗೊಂದು ಗುದ್ದು ಹೆಚ್ಚು.
೩೫೭ ಉತ್ತರದ ಪೌರುಷ ಒಲೆಯ ಮುಂದೆ.
೩೫೮ ಜಾಣನಿಗೆ ಮಾತಿನ ಪೆಟ್ಟು, ದಡ್ಡನಿಗೆ ದೊಣ್ಣೆ ಪೆಟ್ಟು.
೩೫೯ ಬಡವನ ಹೆಂಡತಿ ಎಲ್ಲರಿಗೂ ಅತ್ತಿಗೆ.
೩೬೦ ತರುವಾಗ ಉಲ್ಲಾಸ, ತೆರುವಾಗ ಫಾಲ್ಗುಣ ಮಾಸ.
೩೬೧ ಊರು ಬಿಟ್ಟರೂ ಪ್ರಾರಬ್ಧ ಬಿಡದು.
೩೬೨ ಹತ್ತಿ ತೂಗುವಲ್ಲಿ ನೊಣಕ್ಕೆ ಉಪವಾಸ.
೩೬೩ ಮಂಗನಿಗೆ ಹೆಣ್ಣು ಕೊಟ್ಟು ಮನೆಯೆಲ್ಲ ಮಂಗಗಳು.
೩೬೪ ತಂದ್ರ ತಿಂದ್ರ ಬರಿ ಗುಡಿ.
೩೬೫ ಅರಸಿನ ಮುಂಡಿಗೆ ಆದವರಿಗೆ ಊರೆಲ್ಲ ಅರಸಿನ.
೩೬೬ ಅಡುಗೆ ಮಾಡಿ ಕಲಿ, ಉಡುಗೆ ನೋಡಿ ಕಲಿ.
೩೬೭ ಮದುವೆ ಆಗದೆ ಹುಚ್ಚು ಬಿಡದು, ಹುಚ್ಚು ಬಿಡದೆ ಮದುವೆ ಆಗದು.
೩೬೮ ಮರ ಮುರಿಯಿತು, ಹಕ್ಕಿ ಹಾರಿತು.
೩೬೯ ಮೆಟ್ಟಿದ್ದು ಅಮಟೆ, ಹಿಡಿದದ್ದು ನುಗ್ಗೆ.
೩೭೦ ಒಂದು ಕಣ್ಣಿಗೆ ಸುಣ್ಣ, ಇನ್ನೊಂದು ಕಣ್ಣಿಗೆ ಬೆಣ್ಣೆ.
೩೭೧ ಎರಡು ದಾಸರನ್ನು ನಂಬಿ ಕುರುಡ ದಾಸ ಕೆಟ್ಟ.
೩೭೨ ಕೈಗೆ ಎಟಕದಿದ್ದ ಹೂ ದೇವರಿಗೆ.
೩೭೩ ಮೆಟ್ಟಲು ಕಲ್ಲು ಚಿನ್ನವಾದರೆ, ಅರ್ಧ ದೇವರಿಗೆ.
೩೭೪ ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧ ರಾತ್ರಿಗೆ ಕೊಡೆ ಹಿಡಿದ.
೩೭೫ ಓದದ ಬಾಯಿ ಬಿಲದ ಬಾಯಿ.
೩೭೬ ಹೋರಿಗೂ ಮಾರಿಗೂ ದೂರವಿರು.
೩೭೭ ಬೆಕ್ಕಿನ ಪುಣ್ಯಕ್ಕೆ ಸಿಕ್ಕ ಹರಿದು ಬಿತ್ತು.
೩೭೮ ಕಂಡು ಬಾ ಎಂದರೆ ಕೊಂಡು ಬರುವ.
೩೭೯ ಎಲ್ಲ ಬಣ್ಣ ಮಸಿ ನುಂಗಿತು.
೩೮೦ ಬೇಡುವವನ ಹತ್ತಿರ ಬೇಡಿ, ಸಾಯುವ ತನಕ ಪೆಟ್ಟು ತಿಂದ.
೩೮೧ ನಂದರಾಯನ ಭಂಡಾರ ನರಿ ನಾಯಿ ತಿಂದಿತು.
೩೮೨ ಸಂತೋಷವೇ ಯೌವನ, ಚಿಂತೆಯೇ ಮುಪ್ಪು.
೩೮೩ ಎಲ್ಲ ಬಿಟ್ಟ, ಭಂಗಿ ನೆಟ್ಟ.

೩೮೪ ತೊಂಭತ್ತಿನ ಮೇಲೆ ತೊಗರಿಬೇಳೆ.

೩೮೫ ಹೆಡ್ಡನಿಗೆ ಒಂದು ಕಡೆ, ಬುದ್ಧಿವಂತನಿಗೆ ಮೂರು ಕಡೆ.

೩೮೬ ಆಯುಷ್ಯ ತೀರಿದವನ ಒಟ್ಟಿಗೆ ದೋಣಿ ಹತ್ತಿದರೆ, ಎಲ್ಲರಿಗೂ ಒಂದೊಂದು ಗುಟುಕು ನೀರು.

೩೮೭ ಹಂದಿಗೆ ಹಲವು ಮರಿ, ಸಿಂಹಕ್ಕೆ ಒಂದೇ ಮರಿ.

೩೮೮ ತೊಂಭತ್ತಿಗೆ ಹೋದರೂ, ಉಂಬ ಹೊತ್ತಿಗೆ ಬರುವ.

೩೮೯ ಅಡಿಗೆ ಬಿದ್ದರೂ, ಮೂಗು ಮೇಲೆ.

೩೯೦ ಬೆಳಿಗ್ಗೆ ಹಿಡಿದ ಮಳೆ ನಿಲ್ಲದು, ಸಾಯಂಕಾಲ ಬಂದ ನೆಂಟರು ಹೋಗರು.

೩೯೧ ತನ್ನ ಊರಲ್ಲಿ ರಂಗ, ಪರವೂರಿನಲ್ಲಿ ಮಂಗ.

೩೯೨ ಮದುವೆ ಮಾಡಿ ನೋಡು, ಮನೆಕಟ್ಟಿ ನೋಡು.

೩೯೩ ಬಡವನ ಸಿಟ್ಟು ದವಡೆಗೆ ಮೂಲ.

೩೯೪ ಮದುವೆ ಆಯ್ತೋ, ಬಿಡು; ಮನೆ ಕಟ್ಟಿದೆಯೋ, ಸುಡು.

೩೯೫ ದೊಡ್ಡವರಲ್ಲಿ ಕಂಡು ಬರಬಹುದು; ಬಡವರಲ್ಲಿ ಉಂಡು ಬರಬಹುದು.

೩೯೬ ಶ್ರೀಮಂತಿಕೆ ಕುಳಿತುಕೊಳ್ಳಲಿಕ್ಕೆ ಬಿಡದು; ಬಡತನ ಏಳಲಿಕ್ಕೆ ಬಿಡದು.

೩೯೭ ಕುಂಟನಿಗೆ ಎಂಟು ಬುದ್ಧಿ.

೩೯೮ ಹುಬ್ಬಕ್ಕಿಯ ಕಾಟ ಹೊಲದಲ್ಲಿ; ಇಬ್ಬರು ಹೆಂಡಿರ ಕಾಟ ಮನೆಯಲ್ಲಿ;

೩೯೯ ಜಗಲಿ ಹಾರಿ ಗಗನ ಹಾರುವುದು.

೪೦೦ ಕೋಪದಲ್ಲಿ ಕೊಯ್ದ ಮೂಗು, ಶಾಂತದಲ್ಲಿ ಬರಲಾರದು.

೪೦೧ ಕನ್ನೆ ತಿಂಗಳ ಬಿಸಿಲು ಸಮಗಾರನೊಬ್ಬ ಬಲ್ಲ.

೪೦೨ ಮಂತ್ರಿಯ ಮನೆ ಹಾಳು; ತಂತ್ರಿಯ ತಲೆ ಹಾಳು.

೪೦೩ ಆರು ಸಲಗೆ (೧ ಸಲಗೆ=೧೦೦ ಸೂಡಿ) ಹುಲ್ಲು ತಿಂಬ ಎಮ್ಮೆಗೆ ಮೂರು ಸೊಲಿಗೆ ಹಾಲು.

೪೦೪ ಅನಿಷ್ಟಕ್ಕೆ ಅಂಗಾರಕ ಗುರಿ.

೪೦೫ ಮಿಂದು ಮಿಂದು ಬೂದಿಯಲ್ಲಿ ಹೊರಳಿದ ಹಾಗೆ.

೪೦೬ ಕಾಶಿಗೆ ಹೋದರೆ ಕಾಸಿಗೊಂದು ಕುದುರೆ.

೪೦೭ ಎಣ್ಣೆ ಬರುವಾಗ ಗಾಣ ಮುರಿಯಿತು.

೪೦೮ ಅಲ್ಪ ವಿದ್ಯಾ ಮಹಾಗರ್ವಿ.
೪೦೯ ಮಲ್ಲಿಗೆ ಹೂವಿನಿಂದಾಗಿ ಬಾಳೆನಾರಿಗೂ ಬೆಲೆ.
೪೧೦ ಸೆಟ್ಟಿ ಶೃಂಗಾರ ಆಗುವುದರೊಳಗೆ ಪಟ್ಟಣ ಸೂರೆ ಆಯ್ತು.
೪೧೧ ಊರಿಗೆ ಉಪಕಾರಿ, ಮನೆಗೆ ಮಾರಿ.
೪೧೨ ಆನೆ ಹೋಗಿದೆ, ಬಾಲ ಸಿಕ್ಕಿ ಬಿದ್ದಿದೆ.
೪೧೩ ಕಂಡರೆ ಮಾಣಿ ಉಂಡರೆ ಗೋಣಿ.
೪೧೪ ಹುಬ್ಬೆ ಮಳೆ ಅಬ್ಬೆ ಮೊಲೆ ಉಂಡ ಹಾಗೆ.
೪೧೫ ಉತ್ತರೆ ಮಳೆ ಬಂದರೆ ಕುತ್ತರೆ (ರಾಶಿ) ಕೂಳು.
೪೧೬ ಅಳಿಯ ಹುಟ್ಟಿ ಮಾವನಿಗೆ ಕೇಡು; ನಳಿಯ (ಕಳೆ ಗಿಡ) ಹುಟ್ಟಿ ಅಗೆಗೆ (ಬತ್ತದ ಗಿಡ) ಕೇಡು.
೪೧೭ ಹರಿ ಒಡೆದರೆ ಹಂಚು, ಹಂಚು ಒಡೆದರೆ ಪಂಚಂಪಾಡು.
೪೧೮ ಬಂದಷ್ಟು ಬರಲಿ ಬರಡೆಮ್ಮೆ ಹಾಲು.
೪೧೯ ಕನ್ನಡಿಹಾವಿಗೆ ಬಸಿರೇ ಶತ್ರು; ಸ್ತ್ರೀಗೆ ಸೌಂದರ್ಯವೇ ಶತ್ರು.
೪೨೦ ಬಂಟರಲ್ಲಿ ತಂಟೆ ಹೆಚ್ಚು; ಕುಂಟರಲ್ಲಿ ಗರ್ವ ಹೆಚ್ಚು.
೪೨೧ ದೂರದ ಬೆಟ್ಟ ನುಣ್ಣಗೆ.
೪೨೨ ಸುಗ್ಗಿಗೆ ನೀರು ಮುಂದೆ; ಕಾರ್ತಿಗೆ ಕಾಲ ಮುಂದೆ.
೪೨೩ ತನ್ನ ಮರಿ ಹೊನ್ನ ಮರಿ; ಅನ್ಯರ ಮರಿ ಕಾಗೆ ಮರಿ.
೪೨೪ ಮಾಡಿದ ಹಿಟ್ಟಿಗಿಂತ ಬೇಡಿದ ಹಿಟ್ಟು ಹೆಚ್ಚು.
೪೨೫ ಬಗ್ಗನ ಗುಟ್ಟು ಬರೀ ಗುಟ್ಟು.
೪೨೬ ಜೋಗಿ ಜೋಗಿ ತೊಟ್ಟುಕೊಂಡರೆ ಮೈಯೆಲ್ಲ ಬೂದಿ.
೪೨೭ ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ.
೪೨೮ ದುರ್ಭಿಕ್ಷದಲ್ಲಿ ಅಧಿಕ ಮಾಸ.
೪೨೯ ಮಾತು ಮನೆ ಕೆಡಿಸಿತು; ತೂತು ಒಲೆ ಕೆಡಿಸಿತು.
೪೩೦ ಸೆಗಣಿಯ ಮೇಲೆ ಸಾವಿರ ಹುಳ, ಮಧ್ಯಾಹ್ನದ ಮೇಲೆ ಲಯ.
೪೩೧ ಅಟ್ಟ ಮೇಲೆ ಒಲೆ, ಕೆಟ್ಟ ಮೇಲೆ ಬುದ್ಧಿ.
೪೩೨ ತೊಂಡೆಕಾಯಿಗೆ ಬೀಜ ಹೆಚ್ಚು; ಕುಳ್ಳನಿಗೆ ಕುತಂತ್ರ ಹೆಚ್ಚು.
೪೩೩ ಗಂಜಿಗೆ ಗತಿ ಇಲ್ಲದವನು ಅನ್ನಕ್ಕೆ ಅಳುವನು.
೪೩೪ ಸೊಕ್ಕಿದ್ದು ಉಕ್ಕುತ್ತದೆ, ಉಕ್ಕಿದ್ದು ಒಲೆಗೆ ಹಾರುತ್ತದೆ.
೪೩೫ ಕೊಟ್ಟ ಸಾಲ ಕೇಳದೆ ಹೋಯ್ತು, ನೆಟ್ಟ ಹೊಲ ನೋಡದೆ ಹೋಯ್ತು.

೪೩೬ ಉಪ್ಪು ತಿಂದವ ನೀರು ಕುಡಿದಾನು.
೪೩೭ ಹಲವು ಮಕ್ಕಳ ತಾಯಿ ಹಾದಿಯ ಮೇಲೆ.
೪೩೮ ಸೂಳೆಯ ಪಾಪಕ್ಕೆ ಸನ್ಯಾಸಿಯನ್ನು ಶೂಲಕ್ಕೆ ಹಾಕಿದರು.
೪೩೯ ಹಾದರದವಳ ಮನೆಗೆ ಹಲವಾರು ಬಾಗಿಲು.
೪೪೦ ಮಾಡಿದ ಪಾಪಕ್ಕೆ ಮನವೇ ಸಾಕ್ಷಿ; ತೋಡಿದ ಬಾವಿಗೆ ಜಲವೇ ಸಾಕ್ಷಿ.
೪೪೧ ಎತ್ತು ಮಾರಿ ಮತ್ತೂ ಗಂಜಿ.
೪೪೨ ನಗು ಮೋರೆಯೊಳಗೆ ಧಗೆ ಮನಸ್ಸು.
೪೪೩ ಹಣ್ಣು ತಿಂದವನು ನುಣುಚಿಕೊಂಡ, ಸಿಪ್ಪೆ ತಿಂದವನು ಸಿಕ್ಕಿಕೊಂಡ.
೪೪೪ ಸಮಯವಾದ ಮೇಲೆ ಬಿಜ್ಜತ್ತಿ (ಸೂಲಗಿತ್ತಿ) ಹೊರಗೆ.
೪೪೫ ಏನಿಲ್ಲ, ಎಂತಿಲ್ಲ, ಮಗನ ಹೆಸರು ರಾಮಣ್ಣ.
೪೪೬ ಗಂಡ ಹೆಂಡಿರ ಜಗಳ ಉಂಡು ಮಲಗುವ ತನಕ.
೪೪೭ ಹಲವು ಸಮಗಾರರು ಸೇರಿ, ಚರ್ಮದ ಹದ ಕೆಟ್ಟುಹೋಯಿತು.
೪೪೮ ಉಂಡು ತಿಂದು ತುಂಡು ಕಂಬಳಿ.
೪೪೯ ಗಾಳಿ ಬಂದಾಗ ತೂರಿಕೋ.
೪೫೦ ಸದ್ಗುಣಕ್ಕೆ ಮಿಕ್ಕಿದ ಸಂತೋಷವೇ ಇಲ್ಲ.
೪೫೧ ಎಲ್ಲ ಬಲ್ಲಪ್ಪ ಕೇಳಿದರೆ ಕಲ್ಲಪ್ಪ.
೪೫೨ ಉಪ್ಪರಿಗೆಯ ಮನೆಯಾದರೂ ಮನೆಯೇ, ಗುಡಿಸಲಾದರೂ ಮನೆಯೇ.
೪೫೩ ಕೂಡಿದ ಮೇಲೆ ಕಾಡಬಾರದು.
೪೫೪ ಕೇಡು ಬಗೆದವನಿಗೆ ಕೇಡು ತಪ್ಪದು.
೪೫೫ ಮಟ್ಟು ತಿಳಿಯದೆ ಮಾತಾಡಬೇಡ.
೪೫೬ ಬೇರು ಬಲ್ಲವರ ಹತ್ತಿರ ಎಲೆಯ ಪರಿಚಯ ಕೇಳುವುದೇ?
೪೫೭ ಹಸಿಗೋಡೆಗೆ ಹರಳು ಇಟ್ಟ ಹಾಗೆ.
೪೫೮ ಅಕ್ಕಿಯ ಮೇಲೂ ಆಸೆ, ನೆಂಟರ ಮೇಲೂ ಆಸೆ.
೪೫೯ ಸೆಟ್ಟಿಯ ಸಾಲ ಸತ್ತ ಮೇಲೆ ತಿಳಿಯುತ್ತದೆ.
೪೬೦ ಯಾರು ಕದ್ದರೂ ಸೂಗೋರ್ಳ್ಳಿ ಅಂತು ಕದ್ದ.

Edited, Printed & Published by K. V. Shenoy
at The Prabhat Printers Ltd., Mangalore.